KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೧೩, ೨೦೦೬ (ಚೈತ್ರ ೨೩, ಶಕ ವರ್ಷ ೧೯೨೮) | ಸಂಚಿಕೆ ೧೫ |
|---|---|---|

## ಭಾಗ – ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿ ಸಣ್ಣ ನೀರಾವರಿ ಉಪ–ವಿಭಾಗ, ಸೇಡಂ**

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)**

**ಕೈಪಿಡಿ–1:–** ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು.

ಸಂಸ್ಥೆಯ ವಿವರಗಳು ಮತ್ತುಕರ್ತವ್ಯ ಮತ್ತು ವಿಧಿಗಳು.

ಸಣ್ಣ ನೀರಾವರಿ ಉಪ–ವಿಭಾಗ, ಸೇಡಂ ವು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತದೆ. ಈ ಉಪ–ವಿಭಾಗದಡಿಯಲ್ಲಿ ದಿನಾಂಕ: 01.04.2005ರ ಪ್ರಕಾರ ಒಟ್ಟು 20 ಸಣ್ಣ ನೀರಾವರಿ ಯೋಜನೆಗಳು ಅಸ್ತಿತ್ವದಲ್ಲಿವೆ ಇವುಗಳಿಂದ ಒಟ್ಟು 3528.. ಹೆಕ್ಟೇರ್ ಭೂಮಿಗೆ ನೀರಾವರಿಯಾಗುವ ಅಚ್ಚುಕಟ್ಟು ಪ್ರದೇಶ ಹೊಂದಿದೆ.

1) ಸೇಡಂ–3243

ಈ ಉಪ–ವಿಭಾಗದ ಕಾರ್ಯವ್ಯಾಪ್ತಿಯು ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನಲ್ಲಿ 40 ಹೆಕ್ಟೇರ್‌ಗಿಂತ ಅಧಿಕ ಹಾಗೂ ಹೆಕ್ಟೇರ್‌ಗಿಂತ ಕಡಿಮೆ ಅಚ್ಚುಕಟ್ಟು ಬರುವ ಸಣ್ಣ ನೀರಾವರಿ ಕೆರೆ, ಜಿನಗು ಕೆರೆ, ಏತ ನೀರಾವರಿ ಯೋಜನೆ, ಅಣೆಕಟ್ಟು, ಬ್ಯಾರೇಜ್ ಹಾಗೂ ಬ್ಯಾರೇಜ್ ಒಳಗೊಂಡ ಸೇತುವೆಗಳ ನಿರ್ಮಾಣ ಮತ್ತು ಅವುಗಳ ನಿರ್ವಹಣೆಗೊಂಡು ಕಾರ್ಯಭಾರ ಹೊಂದಿರುತ್ತದೆ.

ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕೂ ಕರ್ನಾಟಕದ ಅತ್ಯಂತ ಹಿಂದುಳಿದ ತಾಲ್ಲೂಕುಗಳಾಗಿದ್ದು ಪ್ರಾದೇಶಿಕ ಅಸಮತೋಲನೆಯು ಕೂಡ ಒಂದು ಪ್ರಮುಖ ಕಾರಣವಾಗಿರುತ್ತದೆ. ಈ ಭಾಗದ ಶೇಕಡಾ 80 ರಷ್ಟು ರೈತರು ಪ್ರಮುಖವಾಗಿ ಮಳೆ ಮೇಲೆಯೇ ಅವಲಂಬಿತರಾಗಿದ್ದು, ಇತ್ತೀಚಿನ ವರ್ಷಗಳಲ್ಲಿ ಮಳೆ ಪ್ರಮಾಣ ಅತ್ಯಂತ ಕಡಿಮೆಗೊಂಡು ಪ್ರತಿ ವರ್ಷವು ಬರಗಾಲದ ಸಮಸ್ಯೆ ಎದುರಾಗುತ್ತಿದೆ. ದಿನಾಂಕ: 01.04.2005ರ ಪ್ರಕಾರ 39 ಸಣ್ಣ ನೀರಾವರಿ ಯೋಜನೆಗಳು ಅಸ್ತಿತ್ವದಲ್ಲಿದ್ದವು. ಇವುಗಳಿಂದ 3528 ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ.

ಈ ಉಪ–ವಿಭಾಗವು ಸೇಡಂ ತಾಲ್ಲೂಕಿಗೆ ಸಂಬಂಧಿಸಿದ್ದು, ಈ ತಾಲ್ಲೂಕಿನಲ್ಲಿ ಬರುವ ಎಲ್ಲಾ ಸಣ್ಣ ನೀರಾವರಿ ಯೋಜನೆಗಳ ನಿರ್ಮಾಣ, ಉಸ್ತುವಾರಿ ಹಾಗೂ ನಿರ್ವಹಣೆಯನ್ನು ನೋಡಿಕೊಳ್ಳುತ್ತದೆ.

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ–ವಿಭಾಗದ ಮುಖ್ಯಸ್ಥರಾಗಿರುತ್ತಾರೆ. ಇವರ ಕಛೇರಿಯಲ್ಲಿ ಮುಖ್ಯವಾಗಿ ಎರಡು ಶಾಖೆಗಳು ಕಾರ್ಯನಿರ್ವಹಿಸುತ್ತಿರುತ್ತದೆ.

1) ಆಡಳಿತ ಶಾಖೆ.

2) ತಾಂತ್ರಿಕ ಶಾಖೆ.

(1) **ಆಡಳಿತ ಶಾಖೆ:–** ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ–ವಿಭಾಗ, ಗುಲ್ಬರ್ಗಾ ಕಛೇರಿಯಲ್ಲಿ ಮಂಜೂರಾಗಿರುವ 15 ಹುದ್ದೆಗಳ ಪೈಕಿ ಅಧಿಕಾರಿಗಳು, ಒಬ್ಬರನ್ನು ಬಿಟ್ಟು (ಅಧಿಕಾರಿಯು ಹೆಚ್ಚುವರಿ ಪ್ರಭಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ) ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿರುತ್ತಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ 'ಬಿ' 3, ವರ್ಗ 'ಸಿ' ಇ ಮತ್ತು ವರ್ಗ 'ಡಿ' 3 ಸಂಖ್ಯೆಗಳಾಗಿರುತ್ತವೆ.

ಪ್ರಥಮ ದರ್ಜೆ ಸಹಾಯಕರು ಆಡಳಿತ ಶಾಖೆ ಮುಖ್ಯಸ್ಥರಾಗಿದ್ದು, ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ಭವಿಷ್ಯ ನಿಧಿಗಳ ದಾಖಲೆಗಳನ್ನು ನಿರ್ವಹಿಸುವುದು, ವಿಚಾರಣೆ, ವಿದ್ಯುತ್‌ಚ್ಛಕ್ತಿ ಮತ್ತು ದೂರವಾಣಿ ಬಿಲ್ಲುಗಳನ್ನು ಪಾವತಿಸುವುದು, ದಾಖಲೆಗಳನ್ನು ಸಂಗ್ರಹಿಸಿ ಕಾಪಾಡುವುದು.

ನಿರ್ವಹಿಸುವ ಸಂಕ್ಷಿಪ್ತ ಕೆಲಸದ ವಿವರವನ್ನು ಈ ಕೆಳಗೆ ನೀಡಲಾಗಿದೆ.

1) ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು, ವಿದ್ಯುತ್‌ಚ್ಛಕ್ತಿ ಮತ್ತು ದೂರವಾಣಿ ಸಂಬಂಧಿಸಿದ ಸಾದಿಲ್ವಾರು ಬಿಲ್ಲುಗಳನ್ನು ತಯಾರಿಸಿ ಪಾವತಿಸುವುದು.

2) ನಗದು ಮತ್ತು ಸ್ವೀಕೃತಿ ಮತ್ತು ರವಾನೆ ಶಾಖೆಯು ದಾಖಲೆಗಳನ್ನು ನಿರ್ವಹಿಸುವುದು. ಸೇವಾ ಅಂಚೆ ಚೀಟಿಗಳ ದಾಖಲೆ ನಿರ್ವಹಣೆ ದೈನಂದಿನ ಪತ್ರಗಳನ್ನು ರವಾನಿಸುವುದು ಹಾಗೂ ಸ್ವೀಕರಿಸುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತದೆ.

3) ನೌಕರರ ಶಿಸ್ತು ಪ್ರಕರಣ ಮತ್ತು ಅವ್ಯವಹಾರದ ಬಗ್ಗೆ ಮುಂದಿನ ಕ್ರಮಕ್ಕಾಗಿ ಕಾರ್ಯನಿರ್ವಾಹಕ ಅಭಿಯಂತರವರಿಗೆ ವರದಿ ಸಲ್ಲಿಸುವುದು ಇತ್ಯಾದಿ ಕೆಲಸವನ್ನು ನಿರ್ವಹಿಸುತ್ತದೆ.

(4) ಉಗ್ರಾಣ ಶಾಖೆಯ ಕಾರ್ಯಭಾರವನ್ನು ದ್ವಿತೀಯ ದರ್ಜೆ ಸಹಾಯಕರು ನೋಡಿಕೊಳ್ಳುತ್ತಿದ್ದಾರೆ. ಈಗ ಸರ್ಕಾರದವತಿಯಿಂದ ಕಾಮಗಾರಿಗಾಗಿ ಯಾವುದೇ ಸಾಮಗ್ರಿಗಳನ್ನು ಖರೀದಿಸುತ್ತಿಲ್ಲವಾದ್ದರಿಂದ ಈ ಶಾಖೆಗೆ ಹೆಚ್ಚು ಮಹತ್ವ ಇರುವುದಿಲ್ಲ. ಅಲ್ಲದೇ ಹಾಲಿ ಇರುವ ಸಾಮಗ್ರಿಗಳ ವಹಿ ಇತ್ಯಾದಿಗಳನ್ನು ಈ ಶಾಖೆಯಲ್ಲಿ ನಿರ್ವಹಿಸಲಾಗುತ್ತದೆ. ಅಲ್ಲದೇ ಯಂತ್ರೋಪಕರಣಗಳ ನಿರ್ವಹಣೆ ಮತ್ತು ನಿಯತಕಾಲಿಕ ವರದಿಗಳನ್ನು ಸಲ್ಲಿಸುವ ಜವಾಬ್ದಾರಿಯು ಈ ಶಾಖೆಗೆ ಸಂಬಂಧಿಸಿರುತ್ತದೆ.

**(4) ತಾಂತ್ರಿಕ ಶಾಖೆ:–** ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಇವರು ಈ ಉಪ–ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯ ಭಾರವನ್ನು ಹೊಂದಿದ್ದು ಇವರಿಗೆ ಸಹಾಯಕ್ಕಾಗಿ ಸಹಾಯಕ ಇಂಜಿನೀಯರರು ಮತ್ತು ಕಿರಿಯ ಇಂಜಿನೀಯರರು ಸಹಾಯಕರಿರುತ್ತಾರೆ. ಇವರ ಕಾರ್ಯ ವ್ಯಾಪ್ತಿ ಈ ಕೆಳಗಿನಂತಿರುತ್ತದೆ.

1) ಕಾಮಗಾರಿಗಳ ವಾರ್ಷಿಕ ನಿರ್ವಹಣೆ.
2) ಕಾಮಗಾರಿಗಳ ಸರ್ವೆ ಮತ್ತು ಅಂದಾಜು ಪತ್ರಿಕೆ ತಯಾರಿಸುವುದು.
3) ಪ್ರಗತಿಯಲ್ಲಿರುವ ಕಾಮಗಾರಿಗಳನ್ನು ನಿರ್ವಹಿಸುವುದು.
4) ಎಂ.ಎಂ.ಆರ್. ಮತ್ತು ಕೆ.ಡಿ.ಪಿ. ಸಭೆಗಳಿಗೆ ಪ್ರಗತಿಯ ವರದಿ ತಯಾರಿಸುವುದು.
5) ವಿಧಾನ ಸಭಾ ಮತ್ತು ವಿಧಾನ ಪರಿಷತ್ ಪ್ರಶ್ನೆಗಳಿಗೆ ಉತ್ತರಿಸುವುದು.

**ಕೈಪಿಡಿ–2 ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.**

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಕಾರ್ಯಭಾರ ಈ ಕೆಳಗಿನಂತಿದೆ.

1) ಅಂದಾಜು ಪತ್ರಿಕೆ ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
2) ಎಂ.ಎಂ.ಆರ್. ಸಭೆ ನಡೆಸಿ ಕಾಮಗಾರಿಗಳ ಆರ್ಥಿಕ ಮತ್ತು ಭೌತಿಕ ಪ್ರಗತಿ ಪರಿಶೀಲನೆ ಮಾಡುವುದು.
3) ವಿಧಾನಸಭೆ ಮತ್ತು ವಿಧಾನ ಪರಿಷತ್ ನಡುವಳಿಯಲ್ಲಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
4) ಸರ್ಕಾರದ ನಿಗದಿತ ಸಭೆಗಳಿಗೆ ಹಾಜರಾಗುವುದು ಹಾಗೂ ಚರ್ಚಿಸಿದ ಅಂಶಗಳ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವುದು.
5) ದೈನಂದಿನ ಆಡಳಿತವನ್ನು ನಡೆಸುವುದು.
6) ಪ್ರಗತಿಯಲ್ಲಿರುವ ಕಾಮಗಾರಿಗಳ ಪ್ರಗತಿಯನ್ನು ಹಾಗೂ ಗುಣಮಟ್ಟವನ್ನು ತಪಾಸಣೆ ಮಾಡುವುದು.
7) ಉಪ–ವಿಭಾಗ ಕಛೇರಿಯಲ್ಲಿರುವ ಮಾಹಿತಿಯನ್ನು ಮಾಹಿತಿ ಪಡೆಯುವ ಹಕ್ಕಿನ ನಿಯಮ ಪ್ರಕಾರ ಕೋರಿಕೆ ಬಂದಲ್ಲಿ ಸಾರ್ವಜನಿಕರಿಗೆ ನೀಡುವುದು.
8) ಕಛೇರಿಯ ಉಳಿದ ಅಧಿಕಾರಿಗಳ ಮತ್ತು ಸಿಬ್ಬಂದಿಗಳಿಗೆ ಪ್ರತ್ಯೇಕವಾಗಿ ಸ್ವತಂತ್ರ ಅಧಿಕಾರವನ್ನು ನೀಡಿರುವುದಿಲ್ಲ. ಕಾರಣ ಅಧಿಕಾರಿಗಳು ಮತ್ತು ಸಿಬ್ಬಂದಿಗಳು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರಿಗೆ ಕರ್ತವ್ಯ ನಿಭಾಯಿಸಲು ಸಹಾಯ ಮಾಡುವುದು ಹಾಗೂ ಸಹಕರಿಸುವುದು.

**ಕೈಪಿಡಿ–3:– ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳ ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು.**

ಇಲಾಖೆಯ ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ

1) ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2
2) ಕರ್ನಾಟಕ ಪಾರದರ್ಶಕ ನಿಯಮ 2000
3) ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.
4) ಭೂಸ್ವಾಧೀನ ಕಾಯ್ದೆ
5) ಉಗ್ರಾಣ ಕೈಪಿಡಿ
6) ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

**ನೀರಾವರಿ ಕಾಮಗಾರಿಗಳ ನಿರ್ವಹಣೆಯಲ್ಲಿ**

1) ಕರ್ನಾಟಕ ನೀರಾವರಿ ಕಾಯ್ದೆ.
2) ಕರ್ನಾಟಕ ನೀರಾವರಿ (ನೀರಿನ ಕರ ವಿಧಿಸುವುದು) ನಿಯಮ 1965
3) ನೀರಾವರಿ ಕೈಪಿಡಿ 1974.

ಇವುಗಳನ್ನು ಅನುಸರಿಸಲಾಗುತ್ತಿದೆ.

ವಿಭಾಗ ಕಛೇರಿಯಲ್ಲಿ ಮಂಜೂರಾದ ಒಪ್ಪಂದದ ಪತ್ರದನ್ವಯ ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕಔಟ ನೀಡಿ ಕೆಲಸ ಚಾಲನೆ ಮಾಡಲಾಗುತ್ತದೆ. ಸಂಬಂಧಿಸಿದ ಸಹಾಯಕ/ಕಿರಿಯ ಅಭಿಯಂತರರು, ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು ಆಗಿಂದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಅಭಿಯಂತರು, ಅಧೀಕ್ಷಕ ಅಭಿಯಂತರರು ಮತ್ತು ಮುಖ್ಯ ಇಂಜಿನೀಯರರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆ ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಅಭಿಯಂತರರು ಮತ್ತು ಅಧೀಕ್ಷಕ ಅಭಿಯಂತರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತಿದೆ.

ವರ್ಷದಲ್ಲಿ ಒಂದು ಸಲ ಮುಖ್ಯ ಅಭಿಯಂತರರ ಕಛೇರಿ ಹಾಗೂ ಅಧೀಕ್ಷಕ ಅಭಿಯಂತರರ ಮತ್ತು ಕಾರ್ಯನಿರ್ವಾಹಕ ಅಭಿಯಂತರರು ಕಛೇರಿಯಿಂದ ಉಪ–ವಿಭಾಗದ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರೂ ಕೂಡ ನಿವೇಶನವನ್ನು ಪರಿವೀಕ್ಷಣೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ–4:–** ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು.

ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳು ಆರ್ಥಿಕ ಪ್ರಾಧಿಕಾರ ಪ್ರತ್ಯಾಯೋಜನೆ, ಸರ್ಕಾರಿ ಆದೇಶ ಸಂಖ್ಯೆ: ಪಿಡಬ್ಲ್ಯೂ–1 ಎಫ್‌ಸಿಆರ್–93 ಬೆಂಗಳೂರು ದಿನಾಂಕ: 15.12.1994.

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಸರಕಾರಿ ಆದೇಶ ಸಂಖ್ಯೆ: ಎಫ್‌ಡಿ–1 ಟಿಎಫ್‌ಸಿ 2001, ಬೆಂಗಳೂರು ದಿನಾಂಕ: 02.02.2001.

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಆರ್ಥಿಕ ಸಂಹಿತೆ.

**ಕೈಪಿಡಿ–5:–** ಇಲಾಖೆಯ ಅಧೀನದಲ್ಲಿರುವ ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು, ಕೈಪಿಡಿಗಳ ವಿವರ,

ಕಛೇರಿ ಕೈಪಿಡಿ, ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು.

- ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು.
- ಕರ್ನಾಟಕ ಸರ್ಕಾರಿ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು.
- ಕರ್ನಾಟಕ ಆರ್ಥಿಕ ಸಂಹಿತೆ.
- ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2
- ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ–2000.
- ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2 ನ್ನು ಅನುಸರಿಸಲಾಗುವುದು.
- ಭೂಸ್ವಾಧೀನ ಕಾಯ್ದೆ.
- ಉಗ್ರಾಣ ಕೈಪಿಡಿ.
- ಮಧ್ಯಸ್ಥಿಕೆ ಕಾಯ್ದೆ. 1996 ಮತ್ತು 1940.
- ಕರ್ನಾಟಕ ನೀರಾವರಿ ಕಾಯ್ದೆ 1965.
- ಕರ್ನಾಟಕ ನೀರಾವರಿ (ನೀರಿನ ಕರ ವಿಧಿಸುವುದು) ನಿಯಮ 1965.
- ನೀರಾವರಿ ಕೈಪಿಡಿ 1974.
- ಐ.ಎಸ್. ಕೋಡ್ಸ್.
- ಏತ ನೀರಾವರಿ ಯೋಜನೆಗಳ ಅಂದಾಜನ್ನು ತಯಾರಿಸಲು ಮಾರ್ಗದರ್ಶನ ಕೈಪಿಡಿ.
- ಸಣ್ಣ ನೀರಾವರಿ ಕೆರೆಗಳ ಅಂದಾಜನ್ನು ತಯಾರಿಸಲು ಮಾರ್ಗದರ್ಶನ ಕೈಪಿಡಿ.
- ಸಾದಿಲ್ವಾರು ವೆಚ್ಚದ ಕೈಪಿಡಿ.
- ಕರ್ನಾಟಕ ಖಜಾನೆ ಸಂಹಿತೆ.
- ಚಾಲ್ತಿ ದರಪಟ್ಟಿ.
- ಬಜೆಟ್ ಕೈಪಿಡಿ.
- ನೀರಾವರಿಗೆ ಸಂಬಂಧಪಟ್ಟಂತೆ ಮುಸ್ತಕಗಳು.

**ದಾಖಲೆಗಳು:–**

ಉಪ–ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲೆಗಳ ಪಟ್ಟಿ.

| | |
|---|---|
| 1) | ಹಾಜರಾತಿ ಪುಸ್ತಕ |
| 2) | ಪತ್ರಾಂಕಿತ ಮತ್ತು ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂಧರ್ಬಿಕ ರಜೆ ವಹಿ ಮತ್ತು ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ. |

| | |
|---|---|
| 3) | ಸಂಘಟನಾ ಫಲಕ. |
| 4) | ಮಂಜೂರಾದ, ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತ:ಖ್ತೆ. |
| 5) | ಕೆಲಸ ವಿತರಣಾ ತಃಖ್ತೆ. |
| 6) | ವೇತನ ಬಡ್ತಿಯ ನಿಗಾ ವಹಿ. |
| 7) | ವೇತನ ಬಡ್ತಿಯ ಮಂಜೂರಾತಿ ವಹಿ. |
| 8) | ಇನ್ ಕಂಬೆನ್ಸಿ ವಹಿ. |
| 9) | ರಹಸ್ಯ ವರದಿಗಳ ವಹಿ. |
| 10) | ಆಸ್ತಿ ಮತ್ತು ಋಣ ಪಟ್ಟಿ : ವಹಿ. |
| 11) | ಮಹಾಲೇಖಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾ ವಹಿ. |
| 12) | ನೌಕರರ ಸೇವಾ ವಹಿಗಳ ಪಟ್ಟಿ ಹಾಗೂ ಸೇವಾ ವಹಿಗಳ ನಿಗಾ ವಹಿ. |
| 13) | ಸೇವಾ ವಹಿ. |
| 14) | ತಾತ್ಕಾಲಿಕ ಆಡಳಿತ ವಹಿ. |
| 15) | ಇಲಾಖಾ ಪರೀಕ್ಷೆಗಳ ನಿಗಾ ವಹಿ. |
| 16) | ದೂರವಾಣಿ, ಟ್ರಂಕ್ ಕರೆಗಳ ವಹಿ. |
| 17) | ಪರಿವೀಕ್ಷಣಾ ಟಿಪ್ಪಣಿ ಪುಸ್ತಕ. |
| 18) | ಕಛೇರಿ ನೌಕರರ ಮನೆಗಳ ವಿಳಾಸ. |
| 19) | ವಿಧಾನ ಸಭೆ/ಪರಿಷತ್ ಪ್ರಶ್ನೆಗಳ ವಹಿ. |
| 20) | ಕಡತಗಳ ವಹಿ ಮತ್ತು ವೈಯಕ್ತಿಕ ವಹಿ. |
| 21) | ಪ್ರತಿ ಮಾಹೆಗಳ ಬಾಕಿ ಪಟ್ಟಿ. |
| 22) | ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತಃಖ್ತೆ. |
| 23) | ಸಾಮಾನ್ಯ ಸ್ವೀಕೃತಿ ವಹಿ. |
| 24) | ರವಾನೆ ವಹಿ. |
| 25) | ಏಪ್ರಿಲ್ ಒಂದರಿಂದ ಬೇರೆ ಬೇರೆ ಕಛೇರಿಗಳಿಂದ ಸ್ವೀಕೃತಿಯಾದ ಮತ್ತು ರವಾನಿಸಲಾದ ಪತ್ರಗಳ ವಿವರಗಳ ತಃಖ್ತೆ. |
| 26) | ಶುದ್ಧ ಪ್ರತಿ ತಃಖ್ತೆ. |
| 27) | ಸ್ಥಳೀಯ ವಿತರಣಾ ರವಾನೆ. |
| 28) | ಕಛೇರಿ ಆದೇಶ ಪುಸ್ತಕ. |
| 29) | ಗೃಹ ನಿರ್ಮಾಣ ಮತ್ತುವಾಹನ ಮುಂಗಡ ಮಂಜೂರಾತಿ ವಹಿ. |
| 30) | ವೈದ್ಯಕೀಯ ವೆಚ್ಚ ಮರು ಪಾವತಿ ಕಡತ. |
| 31) | ಕರ್ನಾಟಕ ಸರ್ಕಾರ ಸಾಮೂಹಿಕ ವಿಮಾ ಯೋಜನೆ ವರ್ಗಾವಾರು ವಹಿ. |
| 32) | ಕಛೇರಿ ಕೈಪಿಡಿಯಲ್ಲಿ ನಿಗದಿಪಡಿಸಿದಂತೆ ಇತರೆ ವಹಿಗಳು. |
| 33) | ಸಾಮಾನ್ಯ ಭವಿಷ್ಯ ನಿಧಿಯ ಪಾಸ್ ಪುಸ್ತಕ. |
| 34) | ಸಾಮಾನ್ಯ ನಗದು ಪುಸ್ತಕ. |
| 35) | ಪಾವತಿ ವಹಿ. |
| 36) | ನಗಧೀಕರಣ ವಹಿ. |
| 37) | ವೇತನ ಬಟಾವಡೆ ವಹಿ. |
| 38) | ಪಾವತಿಯಾಗದ ವೇತನ ವಹಿ. |
| 39) | ಪ್ರಯಾಣ ಭತ್ಯೆ ನಿಗಾ ವಹಿ. |
| 40) | ಪ್ರಯಾಣ ಭತ್ಯೆ ಬಟಾವಡೆ ವಹಿ. |
| 42) | ಪ್ರಯಾಣ ಭತ್ಯೆ ಬಿಲ್ಲುಗಳ ಪರಿಶೀಲನಾ ವಹಿ. |
| 43) | ಸಾದಿಲ್ವಾರು ವೆಚ್ಚ ವಹಿ. ವೋಚರಗಳ ಸಹಿತ. |
| 44) | ವಿಶೇಷ ವಸೂಲಾತಿಗಳ ವಹಿ. |
| 45) | ಆಡಿಟ್ ನೋಟ್, ರಿಜಾಯಿಂಡರ್ಸ್, ಪರಿಶೀಲನಾ ಟಿಪ್ಪಣಿಗಳ ನಿಗಾ ವಹಿ. |
| 46) | ಮೇಲಾಧಿಕಾರಿಗಳ ಅನಿರೀಕ್ಷಿತಾ ತಪಾಸಣಾ ಟಿಪ್ಪಣಿ. |
| 47) | ಅಧಿಕಾರಿಗಳ ಹಾಗೂ ಸಿಬ್ಬಂದಿಗಳ ಮಾಸಿಕ ದಿನಚರಿ. |
| 48) | ಎಲ್ಲಾ ಸಿಬ್ಬಂದಿ ವರ್ಗದವರ ವಾರ್ಷಿಕ ಆಯ-ವ್ಯಯ (ಬಜೆಟ್) ವಹಿ. |

**ತಾಂತ್ರಿಕ ಶಾಖೆ:**

1. ದರ ಸೂಚಿ.
2. ಎಂ.ಎಂ.ಆರ್. ಪುಸ್ತಕ
3. ಹೊಸಕೆರೆ ಮತ್ತು ಜಲಾಶಯಗಳ ವಹಿ.
4. ಆಯವ್ಯಯ ಕಾಮಗಾರಿಗಳ ವಹಿ.
5. ಕೆರೆಗಳ ವಹಿ.
6. ದಾಖಲಾತಿಗಳು.
7. ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ.
8. ಹೆಚ್ಚುವರಿ ಐಟಂ ದರ ಪಟ್ಟಿಯ ವಹಿ.

**ಕೈಪಿಡಿ–6:–** ಇಲಾಖೆಯ ಅಧೀನದಲ್ಲಿರುವ ದಾಖಲೆಗಳ ವರ್ಗೀಕರಣದ ತಃಖ್ತೆ

**ತಾಂತ್ರಿಕ ಶಾಖೆ:**

- ❖ ಕಾರ್ಯನಿರ್ವಾಹಕ ಅಭಿಯಂತರರು, ಅಧೀಕ್ಷಕ ಅಭಿಯಂತರರು ಮತ್ತು ಮುಖ್ಯ ಅಭಿಯಂತರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪಟ್ಟಿಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು.
- ❖ ಪ್ರಗತಿಯ ವರದಿಗಳು.
- ❖ ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ.

**ಆಡಳಿತ ಶಾಖೆ**

- ❖ ಸಾಮಾನ್ಯ ಸ್ವೀಕೃತಿ ವಹಿ.
- ❖ ಸ್ಟಾಂಪು ವಹಿ.
- ❖ ಹಾಜರಿ ಪುಸ್ತಕ
- ❖ ದಾಖಲು ವಹಿ
- ❖ ಪೀಠೋಪಕರಣಗಳು ಮತ್ತು ಇತರೆ ಸಾಮಗ್ರಿಗಳ ವಹಿ
- ❖ ವಿಧಾನಸಭೆ ಮತ್ತು ವಿಧಾನ ಪರಿಷತ್ ಸದಸ್ಯರ ಪ್ರಶ್ನೆಗಳಿಗೆ ಉತ್ತರ ಕಳುಹಿಸುವ ಚಲನವಲನ ವಹಿ.
- ❖ ಗೃಹ ನಿರ್ಮಾಣ ಮುಂಗಡ, ವಾಹನ ಮುಂಗಡ ಚಲನವಲನ ವಹಿ.
- ❖ ಕಛೇರಿ ಆದೇಶ ವಹಿ
- ❖ ಶಿಸ್ತು ಪ್ರಕರಣ ನಿಗಾ ವಹಿ.

**ಕೈಪಿಡಿ–7:–** ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

ಏನು ಇರುವುದಿಲ್ಲ.

**ಕೈಪಿಡಿ–8:–** ಇಲಾಖೆಯಲ್ಲಿರುವ ನಿಗಮ/ಪರಿಷತ್ತು/ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಕೆಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

ಯಾವುದೂ ಇರುವುದಿಲ್ಲ.

**ಕೈಪಿಡಿ–9:–** ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ.

ಈ ಇಲಾಖೆಯಲ್ಲಿಯ ಅಧಿಕಾರದ ಬಗ್ಗೆ ಕೈಪಿಡಿ–2 ರಲ್ಲಿ ಈಗಾಗಲೇ ತಿಳಿಸಲಾಗಿದೆ.

ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ) ಈ ಕೆಳಗೆ ನೀಡಿದೆ.

| ಕ್ರಮ ಸಂಖ್ಯೆ | ಹುದ್ದೆ ಮತ್ತು ಹೆಸರು |
|---|---|
| 1) | **ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು–1**<br>(1) ಶ್ರೀ ಡಿ.ಆರ್. ರಾಮಚಂದ್ರ (ಹೆಚ್ಚುವರಿ ಪ್ರಭಾರಿ) |
| 2) | **ಸಹಾಯಕ ಇಂಜಿನೀಯರ್–3**<br>1) ಶ್ರೀ ಲಾಯಕ ಅಲಿ.<br>2) ಶ್ರೀ ಎಂ. ಬಾಲರೆಡ್ಡಿ.<br>3) ಶ್ರೀ ಗುರುರಾಜ ಜೋಶಿ.<br>4) ಶ್ರೀ ಅಶೋಕ ತಲವಾಡೆ. (ಎರವಲು ಸೇವೆಯ ಮೇಲೆ).<br>5) ಶ್ರೀ ಈರಣ್ಣಾ ಕುಣಿಕೇರಿ, (ಎರವಲು ಸೇವೆಯ ಮೇಲೆ). |
| 3) | **ಕಿರಿಯ ಅಭಿಯಂತರರು–4**<br>1) ಶ್ರೀ ರೇವಣಸಿದ್ದಪ್ಪಾ<br>2) ಶ್ರೀ ಲಕ್ಷ್ಮೀಕಾಂತ ಮಿತ್ರಾ<br>3) ಶ್ರೀ ಮಹ್ಮದ ಯಾಸೀನ್<br>4) ಶ್ರೀ ಮಲ್ಲಿಕಾರ್ಜುನ ಮಾಲಿಪಾಟೀಲ್ |
| 4) | **ಪ್ರಥಮ ದರ್ಜೆ ಸಹಾಯಕರು–1**<br>1) ಶ್ರೀ ಗುರುನಾಥ ಎಲ್.ಕೆ. |
| 5) | **ಪ್ರ.ದ.ಭೂ. ಮಾಪಕರು–1**<br>1) ಶ್ರೀ ಸೈಯದ್ ದಾವೂದ್ |

| ಕ್ರಮ ಸಂಖ್ಯೆ | ಹುದ್ದೆ ಮತ್ತು ಹೆಸರು |
|---|---|
| 6) | **ದ್ವಿತೀಯ ದರ್ಜೆ ಸಹಾಯಕರು–2**<br>1) ಶ್ರೀ ಅಯ್ಯಣ್ಣ |
| 7) | **ಬೆರಳಚ್ಚುಗಾರರು–1**<br>1) ಶ್ರೀ ಬಿ.ವಿ. ಕಟ್ಟಿಮನಿ ದ್ವಿ.ದ.ಸ. (ಎಣಿಕೆ) |
| 8) | **ಜವಾನರು–2**<br>1) ಶ್ರೀ ಹಾಸಿಮ ಸಾಬ<br>2) ಶ್ರೀ ಭೀಮಶ್ಯಾ |
| 9) | **ಕಾವಲುಗಾರ–1**<br>1) ಶ್ರೀಮತಿ ರಸೋಲಬೀ |

**ಕೈಪಿಡಿ–10:**

ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದ ತಿಂಗಳ ವೇತನ/ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು.

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ಉಳಿದವರ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗುತ್ತಿದೆ.

| ಕ್ರ.ಸಂ. | ಹುದ್ದೆ ಮತ್ತು ಹೆಸರು | ವೇತನ ಶ್ರೇಣಿ | ವೇತನ ಮತ್ತು ಭತ್ಯಗಳು |
|---|---|---|---|
| 1) | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು–1<br>ಖಾಲಿ | | |
| 2) | **ಸಹಾಯಕ ಇಂಜಿನೀಯರ್–3** | | |
| | 1) ಶ್ರೀ ಲಾಯಕ ಅಲಿ. | 7400–13120 | 20160.00 |
| | 2) ಶ್ರೀ ಎಂ. ಬಾಲರೆಡ್ಡಿ. | 6000–11200 | 11,288.00 |
| | 3) ಶ್ರೀ ಗುರುರಾಜ ಜೋಶಿ. | 6000–11200 | 10,500.00 |
| 3) | **ಕಿರಿಯ ಅಭಿಯಂತರರು–4** | | |
| | 1) ಶ್ರೀ ರೇವಣಸಿದ್ದಪ್ಪಾ | 4575–8400 | 8688.00 |
| | 2) ಶ್ರೀ ಲಕ್ಷ್ಮೀಕಾಂತ ಮಿತ್ರಾ | 5200–9580 | 10,000.00 |
| | 3) ಶ್ರೀ ಮಹ್ಮದ ಯಾಸೀನ್ | 4575–8400 | 8688.00 |
| | 4) ಶ್ರೀ ಮಲ್ಲಿಕಾರ್ಜುನ ಮಾಲಿಪಾಟೀಲ್ | 5475–8400 | 9388.00 |
| 4) | **ಪ್ರಥಮ ದರ್ಜೆ ಸಹಾಯಕರು–1** | | |
| | 1) ಶ್ರೀ ಗುರುನಾಥ ಎಲ್.ಕೆ. | 3850–7050 | 9756.00 |
| 5) | **ಪ್ರ.ದ.ಭೂ. ಮಾಪಕರು–1** | | |
| | 1) ಶ್ರೀ ಸೈಯದ್ ದಾವೂದ್ | 3850–7050 | 9563.00 |
| 6) | **ದ್ವಿತೀಯ ದರ್ಜೆ ಸಹಾಯಕರು–2** | | |
| | 1) ಶ್ರೀ ಅಯ್ಯಣ್ಣ | 3000–5450 | 6588.00 |
| 7) | **ಬೆರಳಚ್ಚುಗಾರರು–1** | | |
| | 1) ಶ್ರೀ ಬಿ.ವಿ. ಕಟ್ಟಿಮನಿ ದ್ವಿ.ದ.ಸ. (ಎಣಿಕೆ) | 3000–5450 | 5971.00 |
| 8) | **ಜವಾನರು–2** | | |
| | 1) ಶ್ರೀ ಹಾಸಿಮ ಸಾಬ | 2500–3850 | 4608.00 |
| | 2) ಶ್ರೀ ಭೀಮಶ್ಯಾ | 2500–3850 | 4608.00 |
| 9) | **ಕಾವಲುಗಾರ–1** | | |
| | 1) ಶ್ರೀಮತಿ ರಸೋಲಬೀ | 2500–3850 | 4520.00 |

**ಕೈಪಿಡಿ–11:–** ಇಲಾಖೆಯಲ್ಲಿರುವ ವಲಯ/ವಿಭಾಗಗಳಿಗೆ ನೀಡುತ್ತಿರುವ ಆಯವ್ಯಯದ ವಿವರಗಳು.

ಈ ಉಪ–ವಿಭಾಗ ಕಾರ್ಯಾಲಯಕ್ಕೆ ಸಂಬಂಧವಿರುವುದಿಲ್ಲ.

**ಕೈಪಿಡಿ–12:–** ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ.

**ಕೈಪಿಡಿ–13:–** ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯಿತಿ ಪಡೆಯುವವರ ವಿವರ.

ಯಾವುದು ಇಲ್ಲ

**ಕೈಪಿಡಿ–14:–** ಇಲಾಖೆಯಲ್ಲಿರುವ ಮಾಹಿತಿಯನ್ನು ವೆಬ್ ಸೈಟ್‌ನಲ್ಲಿ ನೀಡಿರುವ ಬಗ್ಗೆ ವಿವರ.

ಇಲಾಖೆಯಲ್ಲಿ ವೆಬ್ ಸೈಟ್ ಯಾವುದೂ ಇಲ್ಲ.

**ಕೈಪಿಡಿ–15:–** ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ.

ಸಾರ್ವಜನಿಕರು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪ ವಿಭಾಗ, ಸೇಡಂ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಗುರುನಾಥ ಎಲ್.ಕೆ.. ಪ್ರ.ದ. ಸಹಾಯಕರು, ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

ಈ ಉಪ-ವಿಭಾಗಕ್ಕೆ ದೂರವಾಣಿ ಸಂಪರ್ಕ ಇರುವುದಿಲ್ಲ.

ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ-16:-** ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ಇತರ ವಿವರಗಳು.

ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಮತ್ತು ಪದನಾಮ:

ಸಾರ್ವಜನಿಕರು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಉಪವಿಭಾಗ, ಸೇಡಂ

ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಗುರುನಾಥ, ಎಲ್.ಕೆ. ಪ್ರ.ದ. ಸಹಾಯಕರು, ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

**ಕೈಪಿಡಿ-17:-** ಇತರೆ ವಿವರಗಳು.

**ಶ್ರೀ ಡಿ.ಆರ್. ರಾಮಚಂದ್ರ,** (ಪ್ರಭಾರಿ)
ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ಉಪ-ವಿಭಾಗ, ಸೇಡಂ.

ಪಿ.ಆರ್. 616

## ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-01

### ಅಧಿಸೂಚನೆ

**ವಿಷಯ:** 2005ನೇ ಸಾಲಿನ ಗೆಜ಼ೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಯಲ್ಲಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಶ್ರೀಮತಿ ಸಾರ ಫಾತಿಮಾ (ನೋಂ.ಸಂ. 114067) ಇವರಿಗೆ ದಂಡನೆ ವಿಧಿಸುವ ಬಗ್ಗೆ

**ಓದಲಾಗಿದೆ:**
1) ಶ್ರೀಮತಿ ಸಾರಾ ಫಾತಿಮಾ, ಇವರು 2005ನೇ ಸಾಲಿನ ಗೆಜ಼ೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಗೆ ಸಲ್ಲಿಸಿದ ಅರ್ಜಿ
2) ಶ್ರೀಮತಿ ಸಾರಾ ಫಾತಿಮಾ, ಇವರಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಆರ್. ಹೆಚ್.ಎಸ್. 266/2005-06/ಪಿಎಸ್‌ಸಿ ದಿನಾಂಕ: 13-12-2005
3) ಶ್ರೀಮತಿ ಸಾರಾ ಫಾತಿಮಾ ಇವರು ದಿನಾಂಕ: 30-12-2005ರಂದು ಸಲ್ಲಿಸಿದ ಹೇಳಿಕೆ

**ಪ್ರಸ್ತಾವನೆ:**

ಮೇಲೆ ಓದಲಾದ (1)ರನ್ವಯ ಶ್ರೀಮತಿ ಸಾರಾ ಫಾತಿಮಾ, ಇವರು 2005ನೇ ಸಾಲಿನ ಗೆಜ಼ೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ: 114067ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಅದರಂತೆ ಶ್ರೀಮತಿ ಸಾರಾ ಫಾತಿಮಾ ಇವರು ದಿನಾಂಕ: 23-07-2005ರಂದು ಸಾಮಾನ್ಯ ಅಧ್ಯಯನ ಭಾಗ-1 ಮತ್ತು ಭಾಗ-2ರ ಪರೀಕ್ಷೆಗಳಿಗೆ ಹಾಜರಾಗಿ ಉತ್ತರ ಪತ್ರಿಕೆಯ ಮುಖಪುಟದ ಅಂಕಪಟ್ಟಿಯಲ್ಲಿ ಮೌಲ್ಯಮಾಪಕರು ಮೌಲ್ಯಮಾಪನ ಮಾಡಿದ ತರುವಾಯ ಪ್ರಶ್ನೆಯ ಉತ್ತರಗಳಿಗೆ ಪಡೆದ ಅಂಕಗಳನ್ನು ನಮೂದಿಸುವ ಅಂಕಣಗಳಲ್ಲಿ ಟಿಕ್ (√) ಮಾಡಿರುವ ಕಾರಣ ಇದನ್ನು ಗಮನಿಸಿದ ಮೌಲ್ಯಮಾಪಕರು ಈ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲು ಸಾಧ್ಯವಾಗದೆಂದು ಹಿಂತಿರುಗಿಸಿರುತ್ತಾರೆ.

ಉತ್ತರ ಪತ್ರಿಕೆಯ ಅಂಕ ಪಟ್ಟಿಯ ಮೇಲ್ಭಾಗದಲ್ಲಿ "For the use of examiner only" ಎಂದು ಸೂಚನೆ ನೀಡಿದಾಗ್ಯೂ ಸಹ ಆಯೋಗದ ಈ ಸೂಚನೆಯನ್ನು ಉಲ್ಲಂಘಿಸಿದ ಕಾರಣ ಮೇಲೆ ಓದಲಾದ (2)ರನ್ವಯ ಈ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಇದಕ್ಕೆ ಮೇಲೆ ಓದಲಾದ (3) ರಲ್ಲಿ ಸದರಿ ಅಭ್ಯರ್ಥಿ ತಪ್ಪೊಪ್ಪಿಗೆ ಹೇಳಿಕೆ ನೀಡಿ ಸೂಚನೆಯನ್ನು ಸರಿಯಾಗಿ ಓದಿ ತಿಳಿಯದೆ ತಪ್ಪಾಗಿ ತಿಳಿದು ಟಿಕ್ (√) ಮಾಡಿರುವುದಾಗಿ ತಿಳಿಸಿ ಇದಕ್ಕಾಗಿ ಕ್ಷಮೆಯಾಚಿಸುವುದಾಗಿ ತಿಳಿಸಿರುತ್ತಾರೆ.

ಸದರಿ ಅಭ್ಯರ್ಥಿ ಸಲ್ಲಿಸಿದ್ದ ತಪ್ಪೊಪ್ಪಿಗೆ ಹೇಳಿಕೆಯನ್ನು ಆಯೋಗದ ಮುಂದೆ ಮಂಡಿಸಿದ್ದು, ಆಯೋಗವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಅಭ್ಯರ್ಥಿ ತಪ್ಪನ್ನು ಒಪ್ಪಿಕೊಂಡು ಉದ್ದೇಶಪೂರ್ವಕವಾಗಿ ಈ ಕೃತ್ಯವನ್ನು ಎಸೆಗಿಲ್ಲವೆಂದು ಹೇಳಿದ್ದರೂ ಸಹ ಇದು ಅಭ್ಯರ್ಥಿ ತನ್ನ ಗುರುತನ್ನು ಬಹಿರಂಗ ಪಡಿಸಿದ್ದಾರೆಂದೇ ಪರಿಗಣಿಸಲಾಗಿದೆ.. ಈ ರೀತಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಕಾರಣ ಇದೊಂದು ಪರೀಕ್ಷಾ ದುರಾಚಾರ ಪ್ರಕರಣವೆಂದು ತೀರ್ಮಾನಿಸಿ ಈ ಕೆಳಗಿನಂತೆ ದಂಡನೆ ವಿಧಿಸಲು ಆದೇಶ ನೀಡಿದೆ.

**ಆದೇಶ ಸಂಖ್ಯೆ: ಇ(1)1957/2005-06/ಪಿಎಸ್‌ಸಿ ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2006**

ಕರ್ನಾಟಕ ಲೋಕ ಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ : ಆಡಳಿತ 398/93-94/ಪಿಎಸ್‌ಸಿ ದಿನಾಂಕ: 14-07-1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ಸಾರಾ ಫಾತಿಮಾ (ನೋಂ.ಸಂ. 114067) ಬಿನ್ ಮುಕ್ತರ್ ಅಹಮದ್, ನಂ. 1-44, ಶ್ರೀರಂಗಪಟ್ಟಣ ರಸ್ತೆ, ಬನ್ನೂರು, ಮೈಸೂರು ಜಿಲ್ಲೆ, ಇವರಿಗೆ 2005ನೇ ಸಾಲಿನ ಗೆಜ಼ೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,
**ಬಿ.ಎಸ್. ರಾಮಪ್ರಸಾದ್**
ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ.

ಪಿ.ಆರ್. 683

## ಕರ್ನಾಟಕ ಲೋಕ ಸೇವಾ ಆಯೋಗ ಉದ್ಯೋಗ ಸೌಧ, ಬೆಂಗಳೂರು–01

### ಅಧಿಸೂಚನೆ

**ವಿಷಯ:** 2005ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಯಲ್ಲಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಶ್ರೀ ಹರ್ಷ (ನೋಂ. ಸಂ. 308719) ಇವರಿಗೆ ದಂಡನೆ ವಿಧಿಸುವ ಬಗ್ಗೆ

**ಓದಲಾಗಿದೆ:** 1) ಶ್ರೀ ಹರ್ಷ ಇವರು 2005ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಗೆ ಸಲ್ಲಿಸಿದ ಅರ್ಜಿ
2) ಶ್ರೀ ಹರ್ಷ ಇವರಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಆರ್ ಹೆಚ್.ಎಸ್. 266/2005–06/ಪಿಎಸ್‌ಸಿ ದಿನಾಂಕ: 13–12–2005
3) ಶ್ರೀ ಹರ್ಷ ಇವರ ದಿನಾಂಕ: 21–12–2005ರಂದು ಸಲ್ಲಿಸಿದ ಸಮಜಾಯಿಷಿ ಪತ್ರ

**ಪ್ರಸ್ತಾವನೆ:**

ಮೇಲೆ ಓದಲಾದ (1)ರನ್ವಯ ಶ್ರೀ ಹರ್ಷ ಇವರು 2005ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ: 308719ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಅದರಂತೆ ಶ್ರೀ ಹರ್ಷ ಇವರು ದಿನಾಂಕ: 23–07–2005ರಂದು ಸಾಮಾನ್ಯ ಅಧ್ಯಯನ ಭಾಗ–1 ಮತ್ತು ಭಾಗ–2 ಹಾಗೂ ದಿನಾಂಕ: 24–07–2005ರಂದು ಕಡ್ಡಾಯ ಕನ್ನಡ ಪರೀಕ್ಷೆಗೆ ಹಾಜರಾಗಿ ಈ ವಿಷಯಗಳ ಉತ್ತರ ಪತ್ರಿಕೆಯ ಮುಖ ಪುಟದ ಅಂಕ ಪಟ್ಟಿಯಲ್ಲಿ ಮೌಲ್ಯಮಾಪಕರು ಮೌಲ್ಯಮಾಪನ ಮಾಡಿದ ತರುವಾಯ ಪಡೆದ ಅಂಕಗಳನ್ನು ನಮೂದಿಸುವ ಅಂಕಣಗಳಲ್ಲಿ ಸಂಖ್ಯೆಗಳನ್ನು ನಮೂದಿಸಿರುವ ಕಾರಣ ಇದನ್ನು ಗಮನಿಸಿದ ಮೌಲ್ಯಮಾಪಕರು ಈ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲು ಸಾಧ್ಯವಾಗದೆಂದು ಹಿಂತಿರುಗಿಸಿರುತ್ತಾರೆ.

ಉತ್ತರ ಪತ್ರಿಕೆಯ ಅಂಕ ಪಟ್ಟಿಯ ಮೇಲ್ಭಾಗದಲ್ಲಿ "For the use of examiner only" ಎಂದು ಸೂಚನೆ ನೀಡಿದಾಗ್ಯೂ ಸಹ ಆಯೋಗದ ಈ ಸೂಚನೆಯನ್ನು ಉಲ್ಲಂಘಿಸಿದ ಕಾರಣ ಮೇಲೆ ಓದಲಾದ (2)ರನ್ವಯ ಈ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಇದಕ್ಕೆ ಮೇಲೆ ಓದಲಾದ (3) ರಲ್ಲಿ ಸದರಿ ಅಭ್ಯರ್ಥಿ ತಪ್ಪೊಪ್ಪಿಗೆ ಹೇಳಿಕೆ ನೀಡಿ ಪರೀಕ್ಷೆಯ ಒತ್ತಡ, ಕುತೂಹಲ ಮತ್ತು ಗೊಂದಲದಿಂದಾಗಿ ಈ ರೀತಿ ತಪ್ಪಾಗಿದೆ, ಇದರಲ್ಲಿ ಯಾವುದೇ ದುರುದ್ದೇಶವಿರುವುದಿಲ್ಲ. ಈ ತಪ್ಪನ್ನು ಪರೀಕ್ಷಾ ದುರಾಚಾರವೆಂದು ಪರಿಗಣಿಸದೆ ಅಭ್ಯರ್ಥಿತ್ವವನ್ನು ರದ್ದುಗೊಳಿಸಬಾರದೆಂದು ಕೋರಿರುತ್ತಾರೆ.

ಸದರಿ ಅಭ್ಯರ್ಥಿ ಸಲ್ಲಿಸಿದ್ದ ತಪ್ಪೊಪ್ಪಿಗೆ ಹೇಳಿಕೆಯನ್ನು ಆಯೋಗದ ಮುಂದೆ ಮಂಡಿಸಿದ್ದು, ಆಯೋಗವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಅಭ್ಯರ್ಥಿ ತಪ್ಪನ್ನು ಒಪ್ಪಿಕೊಂಡು ಉದ್ದೇಶಪೂರ್ವಕವಾಗಿ ಈ ಕೃತ್ಯವನ್ನು ಎಸೆಗಿಲ್ಲವೆಂದು ಹೇಳಿದ್ದರೂ ಸಹ ಇದು ಅಭ್ಯರ್ಥಿ ತನ್ನ ಗುರುತನ್ನು ಬಹಿರಂಗ ಪಡಿಸಿದ್ದಾರೆಂದೇ ಪರಿಗಣಿಸಲಾಗಿದೆ.. ಈ ರೀತಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಕಾರಣ ಇದೊಂದು ಪರೀಕ್ಷಾ ದುರಾಚಾರ ಪ್ರಕರಣವೆಂದು ತೀರ್ಮಾನಿಸಿ ಈ ಕೆಳಗಿನಂತೆ ದಂಡನೆ ವಿಧಿಸಲು ಆದೇಶ ನೀಡಿದೆ.

**ಆದೇಶ ಸಂಖ್ಯೆ: ಇ(1) 1956/2005–06/ಪಿಎಸ್‌ಸಿ ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2006**

ಕರ್ನಾಟಕ ಲೋಕ ಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ : ಆಡಳಿತ 398/93–94/ಪಿಎಸ್‌ಸಿ ದಿನಾಂಕ: 14–07–1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ, ಶ್ರೀ ಹರ್ಷ (ನೋಂ. ಸಂ. 308719), S/o ಸತ್ಯನಾರಾಯಣ ಅಲದರ್ಶಿ, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ಹತ್ತಿರ, ಶೋರಾಪುರ್, ಗುಲ್ಬರ್ಗಾ ಜಿಲ್ಲೆ ಇವರಿಗೆ 2005ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,

ಪಿ.ಆರ್. 684

**ಬಿ.ಎಸ್. ರಾಮಪ್ರಸಾದ್**
ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ

### ಪ್ರಕರಣ ಸಂಖ್ಯೆ: ಕಾಅಬ:ಕಾಅಪ:ಮಪ್ರ:ಎಸ್‌ಆರ್-66:2006, ದಿನಾಂಕ: 7ನೇ ಮಾರ್ಚ್ 2006

**ಅರ್ಜಿದಾರರು:**
1) ಶ್ರೀಮತಿ ರಂಜನಾ ಗಂಡ ಶಂಕರ ಗಾಯಕವಾಡ
2) ಶ್ರೀ ಶಂಕರ ತಂದೆ ಪ್ರಭು ಗಾಯಕವಾಡ
ವಾಸ: ಮಾಕನಪೂರ,
ತಾ:ಜಿ: ಬಿಜಾಪೂರ.

**ವಿರುದ್ಧ**

**ಪ್ರತಿವಾದಿಗಳು:**
1) ಬಾಬಸಾಹೇಬ ತಂದೆ ರಾಮಚಂದ್ರ ಶಿಂಧೆ,
ಮಾಲೀಕರು: ಲಾರಿ ಗೂಡ್ಸ್ ವೈಕಲ್ (ಟ್ಯಾಂಕರ್) ನಂ: ಎಂಹೆಚ್ 13:ಆರ್-2236, ವಾಸ: ಬಾರಮತಿ ಎಂಐಡಿಸಿ ವೆಂಚರ್ ಸ್ಟೀಲ್ ಲಿ., ಪ್ಲಾಟ್ ನಂ.ಸಿ 57, ಬಾರಮತಿ, ಜಿಲ್ಲೆ ಪುಣೆ (ಮಹಾರಾಷ್ಟ್ರ ರಾಜ್ಯ)
2) ದಿ ಬ್ರ್ಯಾಂಚ್ ಮ್ಯಾನೇಜರ್,
ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ಬಿಜಾಪೂರ.

### ಪ್ರಕಟಣೆ

ಶ್ರೀ:ಶ್ರೀಮತಿ 1) ರಂಜನಾ ಗಂಡ ಶಂಕರ ಗಾಯಕವಾಡ 2) ಶಂಕರ ತಂದೆ ಪ್ರಭು ಗಾಯಕವಾಡ ಇವರುಗಳಾದ ತಾವು ಮೃತ ಮನೋಹರ ತಂದೆ ಶಂಕರ ಗಾಯಕವಾಡ ಇವರ ತಂದೆ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮನೋಹರ ಇವರು ಒಂದನೇ ಪ್ರತಿವಾದಿಗಳಾದ ಬಾಬಸಾಹೇಬ ತಂದೆ ರಾಮಚಂದ್ರ ಶಿಂಧೆ ಇವರ ಲಾರಿ ಗೂಡ್ಸ್ ವೈಕಲ್ ನಂ: ಎಂಹೆಚ್ 13:ಆರ್-2236 ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 611

ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ ಸಾಗರ**

**ಅಧಿಸೂಚನೆ ಸಂಖ್ಯೆ: ಬಿ3:ಅಮೊ.ವಾಹನ.30/05-06, ದಿನಾಂಕ: 10ನೇ ಮಾರ್ಚ್ 2006**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ಬಜಾಜ್ ಎಂ-80, ಕೆಎ-31-ಹೆಚ್-3044 | ಸೊರಬ ವಲಯ ಇವರ ಅಮೊ ಸಂಖ್ಯೆ: 160/05-06, ದಿನಾಂಕ: 26.02.2006 | 16EBDK59624 | 16CBDK59617 |
| 2 | ಸುಜುಕಿ ಮ್ಯಾಕ್ಸ್-100, ಕೆಎ-15-ಇ-8705 | ಸಾಗರ ವಲಯ ಇವರ ಅಮೊ ಸಂಖ್ಯೆ: 71/05-06, ದಿನಾಂಕ: 10.12.2005. | 1804M051465 | 1804F004299 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 724

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ವಿಷಯ :** ಶಿಂಗನಹಳ್ಳಿ ಸೇವಾ ಸಹಕಾರ ಸಂಘ ನಿ., ಚಿಂತಾಮಣಿ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1) ಈ ಕಛೇರಿ ಆದೇಶದ ಸಂಖ್ಯೆ: ಡಿಆರ್‌ಕೆ/ಎಲ್‌ಕ್ಯೂಡಿ/1977-78, ದಿನಾಂಕ: 16.6.1977.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ ಇವರ ಪತ್ರ ಸಂಖ್ಯೆ: ಸನಿ.48/ಎಲ್‌ಕ್ಯೂಡಿ/ಸಿಆರ್ / 2005-06, ದಿನಾಂಕ: 18.02.2006.

**ಪ್ರಸ್ತಾವನೆ:**

ಶಿಂಗನಹಳ್ಳಿ ಸೇವಾ ಸಹಕಾರ ಸಂಘ ನಿ., ಚಿಂತಾಮಣಿ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ ಇವರ ಆದೇಶ ಸಂಖ್ಯೆ: ಎಆರ್‌ಕೆ/466/1944-45 ದಿನಾಂಕ: 23.8.1944 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ, ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಮೇಲ್ವಿಚಾರಕರು, ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಚಿಂತಾಮಣಿ ಶಾಖೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಪ್ರಭಾರವನ್ನು ಸ್ವಯಂ ವಹಿಸಿಕೊಂಡು ಸಹಕಾರ ಕಾಯ್ದೆ ರೀತ್ಯಾ ಸಮಾಪನಾ ಸಹಕಾರ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ಶೂನ್ಯಗೊಳಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗರವರಿಗೆ ಸಮಾಪನಾ ಸಹಕಾರ ಸಂಘದ ನೋಂದಣಿ ರದ್ದತಿ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗರವರು ಸಮಾಪನಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಸಹಕಾರ ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯವಾಗಿರುವುದನ್ನು ಖಚಿತಪಡಿಸಿ, ಸಂಘದ ಸದಸ್ಯರಿಗೆ ಅಥವಾ ಸಾರ್ವಜನಿಕರಿಗೆ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ರೀತಿಯ ಪ್ರಯೋಜನ ಇರುವುದಿಲ್ಲವೆಂದು ಅಭಿಪ್ರಾಯಿಸಿ, ಋಣ ಸಮಾಪನಾ ಸಹಕಾರ ಸಂಘವನ್ನು ಸಹಕಾರ ಕಾಯ್ದೆ ಕಲಂ 75ರ ರೀತ್ಯಾ ನೋಂದಣಿ ರದ್ದತಿ ಮಾಡಲು, ಸಂಘವನ್ನು ವಿಸರ್ಜಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಈ ಕಛೇರಿಗೆ ಉಲ್ಲೇಖ (2) ರಂತೆ ಸಲ್ಲಿಸಿರುತ್ತಾರೆ.

ಸಮಾಪನಾಧಿಕಾರಿಗಳು ಸಮಾಪನಾ ಸಹಕಾರ ಸಂಘದ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿರುವುದರಿಂದ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ ಇವರ ಶಿಫಾರಸ್ಸಿನೊಂದಿಗೆ ಸಲ್ಲಿಸಿರುವ ಸಮಾಪನಾ ಸಹಕಾರ ಸಂಘದ ನೋಂದಣಿ ರದ್ದತಿ ಪ್ರಸ್ತಾವನೆ ಸೂಕ್ತವಾಗಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್ :/1977-78, ದಿನಾಂಕ: 25ನೇ ಫೆಬ್ರವರಿ 2006**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಡಿ.ಸಿ. ನಾಗರಾಜಯ್ಯ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಶಿಂಗನಹಳ್ಳಿ ಸೇವಾ ಸಹಕಾರ ಸಂಘ ನಿ., ಚಿಂತಾಮಣಿ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್‌ಕೆ/466/1944-45, ದಿನಾಂಕ: 23.8.1944ನ್ನು ರದ್ದುಗೊಳಿಸಿ ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 25.2.2006 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಪಿ.ಆರ್. 612

ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು, ಇವರ ನ್ಯಾಯಾಲಯದಲ್ಲಿ.**

**ದಾವಾ ಸಂಖ್ಯೆ:ಅನಿ(ಕೈ & ಇ)ಡಿಎಪಿ/ಡಿ.4/ಅಧಿಭಾರ/6/2004-2005**

**ಅರ್ಜಿದಾರರು**

ಕಾರ್ಯದರ್ಶಿ,
ಅಲ್ಪತಾ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ, 2ನೇ ಮಹಡಿ,
ನಂ.74/4, ಹಜರತ್ ಬಿಲಾಲ್ ನಗರ, ಪಿ.ಬಿ.ರಸ್ತೆ, ದಾವಣಗೆರೆ-577002.

**ಎದುರು ಅರ್ಜಿದಾರರು**

1. ಕೆ.ಜೆ.ಜಯಪ್ಪ ಬಿನ್ ಮಂಜಪ್ಪ ಅನಕೊಂಡ ಬ್ಯಾಂಕ್ ಬೆಡ್,
ಆನಂದ ಹೈಸ್ಕೂಲ್ ಹಿಂಭಾಗ, ಬಂಬೂಬಜಾರ್ ರಸ್ತೆ, ದಾವಣಗೆರೆ.
2. ಮಹಬೂಬ್ ಬಾಷಾ ಬಿನ್ ಮೊಹಮ್ಮದ್, ಇಬ್ರಾಹಿಂ ಸಾಬ್,
ಮನೆ ನಂ.1443/3, 2ನೇ ಮೈನ್, 9ನೇ ಕ್ರಾಸ್, ಕೆ.ಐ.ಜೆ. ನಗರ, ದಾವಣಗೆರೆ.
3. ಮುನಾವರ್ ಅಹಮದ್ ಬಿನ್ ಅಬ್ದುಲ್ ರಜಾಕ್ ಸಾಬ್,
ದೇವರಾಜ ಅರಸ್ ಕ್ವಾಟ್ರಸ್, ಮರ್ದಾನ್ ನಗರ ಮೇನ್, ಬೇತೂರು ರಸ್ತೆ, ದಾವಣಗೆರೆ.
4. ಬಿ,ಹೆಚ್.ಶಿವಕುಮಾರ್ ಬಿನ್ ಹನುಮಂತಪ್ಪ ಶಾಸ್ತ್ರೀಕಣ್ಣ,
ಹಳೆ ಬೇತೂರು ರಸ್ತೆ, ದಾವಣಗೆರೆ.
5. ಮಹಮ್ಮದ್ ರಫೀ ಬಿನ್ ನಜೀರ್ ಸಾಬ್,
ಮನೆ.ನಂ.314, 4ನೇ ಕ್ರಾಸ್, ಎಸ್.ಆರ್.ಪೇಟೆ. ದಾವಣಗೆರೆ.
6. **ಮತ್ತು ಇಂಪ್ಲೀಡರ್ಸ್ 29 ಜನ**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ನೋಟೀಸ್**

ಮೇಲ್ಕಂಡ ಅರ್ಜಿದಾರರು, 5ನೇ ಎದುರು ಅರ್ಜಿದಾರರ ಸಂಘದ ನೌಕರರಾಗಿ ಕರ್ತವ್ಯ ನಿರ್ವಹಿಸಿದ ಸಮಯದಲ್ಲಿ ಕೋಟ್ಯಾಂತರ ರೂಪಾಯಿಗಳನ್ನು ದುರುಪಯೋಗಪಡಿಸಿದ್ದು ಆ ಪೈಕಿ ಈ ಪ್ರಕರಣದಲ್ಲಿ ರೂ.11,38,941/-, ರೂ.4,21,948/-, 1,16,900/- ಮತ್ತು ಅಬ್ದುಲ್ ರೆಹಮಾನ್ ಇವರು ಎಸ್.ಬಿ.ಖಾತೆ 786 ರಲ್ಲಿ ವಿತ್‌ಡ್ರಾಯಲ್ ಸ್ಲಿಪ್ ಅಥವಾ ಓಚರ್ ಗಳಿಲ್ಲದೆ ಡ್ರಾ ಮಾಡಿರುವ ಮೊತ್ತಗಳಿಗೆ ಸಂಬಂಧಿಸಿದಂತೆ ಅಧಿಭಾರ ಅರ್ಜಿ ಹೂಡಿರುತ್ತಾರೆ. ಈ ಅಧಿಭಾರ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 103 ರ ರೀತ್ಯಾ 5ನೇ ಎದುರು ಅರ್ಜಿದಾರರ ವಶದಲ್ಲಿರುವ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದ ಆದೇಶದ ಮುನ್ನಾ ಮುಟ್ಟುಗೋಲು ಹಾಕಿಕೊಳ್ಳಲು, ಈ ನ್ಯಾಯಾಲಯದಲ್ಲಿ ದಿನಾಂಕ: 30-1-2006 ರಂದು ಅರ್ಜಿದಾರರು ಮಧ್ಯಂತರ ಪರಿಹಾರ ಕೋರಿ ಅರ್ಜಿ ದಾಖಲು ಮಾಡಿರುತ್ತಾರೆ.

ಸದರಿ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ. ಈ ನೋಟೀಸಿಗೆ ಲಗತ್ತಿಸಿರುವ ಅನುಬಂಧದಲ್ಲಿ ವಿವರವಾಗಿ ತಿಳಿಸಿರುವಂತೆ 5ನೇ ಎದುರು ಅರ್ಜಿದಾರರ ಸ್ಥಿರಾಸ್ತಿಗಳನ್ನು ಏಕೆ ಈ ನ್ಯಾಯಾಲಯವು ಅರ್ಜಿದಾರರ ಬೇಡಿಕೆ ಮೊತ್ತಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಆದೇಶವನ್ನು ಹೊರಡಿಸಬಾರದು ಎಂಬುದಕ್ಕೆ 5ನೇ ಎದುರು ಅರ್ಜಿದಾರರಾದ ನೀವು ಅರ್ಜಿದಾರರ ಬೇಡಿಕೆ ಮೊತ್ತಕ್ಕೆ ಸರಿಸಮಾನವಾಗಿ ಸೂಕ್ತ ಭದ್ರತೆಯನ್ನು ಈ ನ್ಯಾಯಾಲಯಕ್ಕೆ ಒಪ್ಪಿಗೆಯಾಗುವಂತೆ, ಈ ನೋಟೀಸ್ ಸ್ವೀಕರಿಸಿದ 15 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಈ ಬಗ್ಗೆ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ, ಲಭ್ಯವಿರುವ ಸಾಕ್ಷ್ಯಾಧಾರಗಳು ಮತ್ತು ಅರ್ಹತೆಯ ಅನುಸಾರ ಸೂಕ್ತ ಆದೇಶ ಹೊರಡಿಸಲಾಗುವುದೆಂದು ತಿಳಿಯುವುದು.

ಈ ನೋಟೀಸನ್ನು ದಿನಾಂಕ: 14-2-2006 ರಂದು ನನ್ನ ಸ್ವಸಹಿ ಮತ್ತು ಮೊಹರಿನೊಂದಿಗೆ ನೀಡಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)

## ಅನುಬಂಧ

**ಅರ್ಜಿದಾರರು ದಿನಾಂಕ: 30.1.2006 ರಂದು ದಾಖಲು ಮಾಡಿರುವ ಮಧ್ಯಂತರ ಪರಿಹಾರ ಅರ್ಜಿಯಲ್ಲಿ ಕೋರಿರುವಂತೆ 5ನೇ ಎದುರು ಅರ್ಜಿದಾರರ ಮಹಮದ್ ರಫೀ ಬಿನ್ ಲೇಟ್, ನಜೀರ್‌ಸಾಬ್ ರವರ ಆಸ್ತಿಗಳ ವಿವರ**

| ಕ್ರ. ಸಂ | ಖಾತೆದಾರರ ಹೆಸರು ಮತ್ತು ವಿಳಾಸ | ಸರ್ವೆ ನಂ. ಮತ್ತು ಸೈಟ್ ನಂ. | ಖಾತೆ ನಂ. | ವಿಸ್ತೀರ್ಣ | ಚಕ್ಕುಬಂದಿ | | | | ಸ್ವತ್ತಿನ ಸ್ಥಳ |
|---|---|---|---|---|---|---|---|---|---|
| | | | | | ಉತ್ತರ | ದಕ್ಷಿಣ | ಪೂರ್ವ | ಪಶ್ಚಿಮ | |
| 1 | ಮಹಮದ್ ರಫೀ (ಅಮಾನತ್ತು ಸಿಬ್ಬಂದಿ) ಬಿನ್ ಲೇಟ್, ನಜೀರ್ ಸಾಬ್, ಡೋ.ನಂ. 314, ಎನ್.ಆರ್.ಪೇಟೆ, 4ನೇ ಕ್ರಾಸ್, ದಾವಣಗೆರೆ. | ಡೋ.ನಂ. 276 ಚಾಲ್ತಿ ಡೋ.ನಂ. 314, 3ನೇ ವಾರ್ಡ್ | 1636 1998-99 | 50X17.5 ಅಡಿಗಳು | ಸೈಯದ್ ಹುಸೇನ್ ಸಾಬ್ ಮನೆ | ಸೈಯದ್ ಹುಸೇನ್ ಸಾಬ್ ಮನೆ | ರಸ್ತೆ | ಪಿ.ಸಿ.ಮಹಮದ್ ಖಾಸಿಂ ಸಾಬ್ ಇವರ ಸೊತ್ತು | ದಾವಣಗೆರೆ ಸಬ್ ರಿಜಿಸ್ಟ್ರಾರ್ ರವರಿಗೆ ಒಳಪಟ್ಟ 3ನೇ ವಾರ್ಡ್ 4ನೇ ಡಿವಿಜನ್ ಮುನ್ಸಿಪಲ್ ಸೈಟ್ ನಂ.276 ಚಾಲ್ತಿಯ ಡೋರ್ ನಂ.314, ಬೇತೂರು ರಸ್ತೆ, ದಾವಣಗೆರೆ |

ಪಿ.ಆರ್. 536

ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು, ಇವರ ನ್ಯಾಯಾಲಯದಲ್ಲಿ.**

**ದಾವಾ ಸಂಖ್ಯೆ:ಅನಿ(ಕೈ & ಇ)ಡಿಎಪಿ/ಡಿ.4/ಅಧಿಭಾರ/7/2004-2005**

**ಅರ್ಜಿದಾರರು**

ಕಾರ್ಯದರ್ಶಿ,
ಅಲ್ಪತಾ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ, 2ನೇ ಮಹಡಿ,
ನಂ.74/4, ಹಜರತ್ ಬಿಲಾಲ್ ನಗರ, ಪಿ.ಬಿ.ರಸ್ತೆ, ದಾವಣಗೆರೆ-577002.

**ಎದುರು ಅರ್ಜಿದಾರರು**

1. ಕೆ.ಜೆ.ಜಯಪ್ಪ ಬಿನ್ ಮಂಜಪ್ಪ
   ಅನಕೊಂಡ ಬ್ಯಾಂಕ್ ಬೆಡ್ ಆನಂದ ಹೈಸ್ಕೂಲ್ ಹಿಂಭಾಗ ಬಂಬೂಬಜಾರ್ ರಸ್ತೆ, ದಾವಣಗೆರೆ.
2. ಅಬ್ದುಲ್ ರೆಹಮಾನ್ ಬಿನ್ ಅಮೀರ್ ಸಾಬ್,
   ಮನೆ.ನಂ. 550/27, ಕೆ.ಆರ್.ರಸ್ತೆ, ದಾವಣಗೆರೆ.
3. ಶಂಷುದ್ದೀನ್ ರಜ್ವಿ ಬಿನ್ ಅಬ್ದುಲ್ ಸತ್ತಾರ್ ಖಾನ್
   16ನೇ ಕ್ರಾಸ್. ಅಜಾದ್ ನಗರ,ದಾವಣಗೆರೆ.

**ಮತ್ತು ಇಂಪ್ಲೀಡರ್ಸ್ 27 ಜನ**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ನೋಟೀಸ್**

ಮೇಲ್ಕಂಡ ಅರ್ಜಿದಾರರು, ಎರಡನೇ ಎದುರು ಅರ್ಜಿದಾರರು ಸಂಘದ ಅಧ್ಯಕ್ಷರಾಗಿದ್ದ ಸಮಯದಲ್ಲಿ ಅರ್ಜಿದಾರ ಸಂಘಕ್ಕೆ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು ಇದರ ವತಿಯಿಂದ "ಚೈತನ್ಯ ಸ್ವಾವಲಂಬನೆ ಯೋಜನೆಯಡಿ" ಮಂಜೂರಾಗಿದ್ದ ರೂ.89,50,860/- ಗಳನ್ನು ಎರಡನೇ ಎದುರು ಅರ್ಜಿದಾರರು ದುರುಪಯೋಗಪಡಿಸಿಕೊಂಡಿದ್ದು ಇವರುಗಳ ವಿರುದ್ದ ಅಧಿಭಾರ ಅರ್ಜಿ ಹೂಡಿರುತ್ತಾರೆ. ಈ ಅಧಿಭಾರ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 103 ರ ರೀತ್ಯಾ ಎರಡನೇ ಎದುರು ಅರ್ಜಿದಾರರ ವಶದಲ್ಲಿರುವ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದ ಆದೇಶದ ಮುನ್ನಾ ಮುಟ್ಟುಗೋಲು ಹಾಕಿಕೊಳ್ಳಲು, ಈ ನ್ಯಾಯಾಲಯದಲ್ಲಿ ದಿನಾಂಕ: 30-1-2006 ರಂದು ಮಧ್ಯಂತರ ಪರಿಹಾರ ಕೋರಿ ಅರ್ಜಿ ದಾಖಲು ಮಾಡಿರುತ್ತಾರೆ.

ಸದರಿ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ. ಈ ನೋಟೀಸಿಗೆ ಲಗತ್ತಿಸಿರುವ ಅನುಬಂಧದಲ್ಲಿ ವಿವರವಾಗಿ ತಿಳಿಸಿರುವಂತೆ ಎರಡನೇ ಎದುರು ಅರ್ಜಿದಾರರ ಸ್ಥಿರಾಸ್ತಿಗಳನ್ನು ಏಕೆ ಈ ನ್ಯಾಯಾಲಯವು ಅರ್ಜಿದಾರರ ಬೇಡಿಕೆ ಮೊತ್ತಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಆದೇಶವನ್ನು ಹೊರಡಿಸಬಾರದು ಎಂಬುದಕ್ಕೆ ಎರಡನೇ ಎದುರು ಅರ್ಜಿದಾರರಾದ ನೀವು,

